# ಕರ್ನಾಟಕ ವಿಧಾನ ಪರಿಷತ್ತು

**ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ** : 35(34)
**ಸದಸ್ಯರ ಹೆಸರು** : ಶ್ರೀ. ಕೆ.ಪ್ರತಾಪ ಚಂದ್ರ ಶೆಟ್ಟಿ (ವಿಧಾನ ಪರಿಷತ್ತಿನ ಸದಸ್ಯರು)
**ಉತ್ತರಿಸುವ ದಿನಾಂಕ** : 09.07.2018.
**ಉತ್ತರಿಸುವ ಸಚಿವರು** : ಮಾನ್ಯ ಜಲಸಂಪನ್ಮೂಲ ಮತ್ತು ವೈದ್ಯಕೀಯ ಶಿಕ್ಷಣ ಸಚಿವರು

| ಕ್ರಮ ಸಂಖ್ಯೆ | ಪ್ರಶ್ನೆ | ಉತ್ತರ |
|---|---|---|
| ಅ) | ಮಾನ್ಯ ಉಪಲೋಕಾಯುಕ್ತರು ಕರ್ನಾಟಕ ನೀರಾವರಿ ನಿಗಮದಿಂದ ನಿರ್ವಹಿಸಲ್ಪಡುತ್ತಿರುವ ವಾರಾಹಿ ನೀರಾವರಿ ಯೋಜನೆಯ ಕಳಪೆ ಕಾಮಗಾರಿಗಳು ಹಾಗೂ ಇನ್ನಿತರ ವಿಚಾರಗಳ ಮೇಲೆ ಬಂದ ದೂರಿಗೆ ತನಿಖೆ ನಡೆಸಿ ನೀಡಿರುವ ವರದಿಯಲ್ಲಿ ವಾರಾಹಿ ನೀರಾವರಿ ಯೋಜನೆಯನ್ನು ಪೂರ್ಣಗೊಳಿಸಲು ವಿಳಂಬ ಮಾಡುತ್ತಿರುವುದರಿಂದ ರೈತರಿಗೆ ಅನುಕೂಲವಾಗುವ ಬದಲು ಇಲ್ಲಿ ಕಾರ್ಯನಿರ್ವಹಿಸುತ್ತಿರುವ ಖಾಸಗಿ ಜಲ ವಿದ್ಯುತ್ ಉತ್ಪಾದನಾ ಘಟಕದವರಿಗೆ ಅನುಕೂಲವಾಗುತ್ತಿದೆ ಎಂದು ವರದಿಯಲ್ಲಿ ತಿಳಿಸಿರುವುದು ನಿಜವೇ; ನಿಜವಾಗಿದ್ದಲ್ಲಿ, ಈ ಬಗ್ಗೆ ಸರ್ಕಾರ ತೆಗೆದುಕೊಂಡ ಹಾಗೂ ತೆಗೆದುಕೊಳ್ಳುವ ಕ್ರಮಗಳೇನು; ಇಲ್ಲವಾದಲ್ಲಿ ಕಾರಣವೇನು; | ಮಾನ್ಯ ಲೋಕಾಯುಕ್ತದಲ್ಲಿ ವಾರಾಹಿ ನೀರಾವರಿ ಯೋಜನೆಯ ಅನುಷ್ಠಾನದ ಬಗ್ಗೆ ಸ್ವೀಕೃತವಾದ ದೂರಿನ ಬಗ್ಗೆ ತನಿಖೆ ನಡೆದಿದ್ದು, ಮಾನ್ಯ ಉಪಲೋಕಾಯುಕ್ತರವರು ಕರ್ನಾಟಕ ಲೋಕಾಯುಕ್ತ ಕಾಯ್ದೆ 1984ರ ನಿಯಮ 12(1)ರನ್ವಯ ತಮ್ಮ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ. ಸದರಿ ವರದಿಯಲ್ಲಿನ ಅಂಶಗಳನ್ನು ಸರ್ಕಾರದ ಹಂತದಲ್ಲಿ ಪರಿಶೀಲಿಸಲಾಗುತ್ತಿದೆ. |
| ಆ) | ಮಾನ್ಯ ಉಪಲೋಕಾಯುಕ್ತರು ತಮ್ಮ ವರದಿಯಲ್ಲಿ ನೀಡಿರುವಂತೆ ವಾರಾಹಿ ನೀರಾವರಿ ಯೋಜನೆಯಿಂದ ಇಲ್ಲಿನ ತನಕ ಸುಮಾರು 100 ಕೋಟಿ ರೂಪಾಯಿ ಸರ್ಕಾರದ ಬೊಕ್ಕಸಕ್ಕೆ ನಷ್ಟವಾಗಿದೆ ಹಾಗೂ ಈ ನಷ್ಟಕ್ಕೆ ನೀರಾವರಿ ಇಲಾಖಾಧಿಕಾರಿಗಳು ಹಾಗೂ ಗುತ್ತಿಗೆದಾರರು ಕಾರಣ ಎಂದಿರುವುದು ನಿಜವೇ; ಈ ರೀತಿ ಸರ್ಕಾರದ ಬೊಕ್ಕಸಕ್ಕೆ ನಷ್ಟವಾಗಲು ಕಾರಣರಾದ ಇಲಾಖಾಧಿಕಾರಿಗಳೂ ಹಾಗೂ ಗುತ್ತಿಗೆದಾರರ ಮೇಲೆ ಕ್ರಮಕ್ಕೈಗೊಳ್ಳುವುದೇ; | |
| ಇ) | ವಾರಾಹಿ ನೀರಾವರಿ ಯೋಜನೆಯನ್ನು ಮೂಲ ಯೋಜನೆಯಂತೆ ಪೂರ್ಣಗೊಳಿಸಲು ತಗಲುವ ಅವಧಿ ಹಾಗೂ ವೆಚ್ಚವೆಷ್ಟು? | ವಾರಾಹಿ ನೀರಾವರಿ ಯೋಜನೆಯಡಿ ಅನುಮೋದನೆಗೊಂಡ ಮೂಲ ಯೋಜನೆಯಂತೆ ಕಾಮಗಾರಿಗೆ ಅಗತ್ಯವಿರುವ ಅರಣ್ಯ ಹಾಗೂ ಇತರೆ ಭೂಮಿಯ ಭೂಸ್ವಾಧೀನ ಪ್ರಕ್ರಿಯೆಯನ್ನು ಪೂರ್ಣಗೊಳಿಸಿ ಈ ಯೋಜನೆಯನ್ನು 2021-22ರೊಳಗಾಗಿ ಪೂರ್ಣಗೊಳಿಸಲು ಯೋಜಿಸಲಾಗಿದೆ.<br>ಸದರಿ ಯೋಜನೆಯ ಪರಿಷ್ಕೃತ ವಿಸ್ತೃತ ಯೋಜನಾ ವರದಿಯ (ಡಿ.ಪಿ.ಆರ್.) ಮೊತ್ತ ರೂ.1789.50 ಕೋಟಿಗಳಾಗಬಹುದೆಂದು ಅಂದಾಜಿಸಲಾಗಿದೆ. ಸದರಿ ವಿಸ್ತೃತ ಯೋಜನಾ ವರದಿ ಪ್ರಸ್ತುತ ಸರ್ಕಾರದ ಹಂತದಲ್ಲಿ ಪರಿಶೀಲನೆಯಲ್ಲಿರುತ್ತದೆ. |

**ಸಂಖ್ಯೆ: ಜಸಂಇ 98 ಸೇಇವಿ 2018**

(ಡಿ.ಕೆ.ಶಿವಕುಮಾರ್)
ಜಲಸಂಪನ್ಮೂಲ ಮತ್ತು ವೈದ್ಯಕೀಯ ಶಿಕ್ಷಣ ಸಚಿವರು